# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಎನ್.ಅಪ್ಪಾಜಿಗೌಡ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 298

ಉತ್ತರಿಸಬೇಕಾದ ಸಚಿವರು : ಮಾನ್ಯ ಕೃಷಿ ಸಚಿವರು

ಉತ್ತರಿಸಬೇಕಾದ ದಿನಾಂಕ : 09.12.2020

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಕೃಷಿ ವಿಶ್ವವಿದ್ಯಾಲಯದಲ್ಲಿ ಸಹಾಯಕ ಪ್ರಾಧ್ಯಾಪಕರ ನೇರ ನೇಮಕಾತಿಯಲ್ಲಿ ಸರ್ಕಾರ ಆದೇಶಗಳನ್ನು ಉಲ್ಲಂಘಿಸಿ ನೇಮಕಾತಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ |
| (ಆ) | ದಿ:03.03.2018ರಲ್ಲಿ ಸರ್ಕಾರ ಶ್ರೀ ಮನೀಶ್ ಮೌದ್ಗಿಲ್ ರವರ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯು ಸರ್ಕಾರಕ್ಕೆ ವರದಿ ಸಲ್ಲಿಸಿದೆಯೇ; ಪ್ರಸ್ತುತ ಅದು ಯಾವ ಹಂತದಲ್ಲಿದೆ; | ಸಲ್ಲಿಸಿರುವುದಿಲ್ಲ.<br><br>ಸರ್ಕಾರದ ಆದೇಶ ಸಂಖ್ಯೆ ಕೃಇ 16 ಕೃವಿಬೆ 2018, ದಿನಾಂಕ: 03.03.2018ರಲ್ಲಿ /ಶ್ರೀ ಮುನೀಶ್ ಮೌದ್ಗಿಲ್, ಐ.ಎ.ಎಸ್ ಇವರ ಅಧ್ಯಕ್ಷತೆಯಲ್ಲಿ ತನಿಖಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಿರುತ್ತದೆ. ಸದರಿ ಸಮಿತಿಯ ತನಿಖೆಯು ಪ್ರಗತಿಯಲ್ಲಿದ್ದಾಗ, ಕೆಲವು ನೇಮಕಗೊಂಡ ಅಭ್ಯರ್ಥಿಗಳು ಈ ವಿಚಾರಣೆಯನ್ನು ಪ್ರಶ್ನಿಸಿ, ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 23188-23223 ನ್ನು ದಾಖಲಿಸಿರುತ್ತಾರೆ. ಈ |

| | | |
|---|---|---|
| | | ರಿಟ್ ಅರ್ಜಿಗಳನ್ನು ಪರಿಗಣಿಸಿದ ನ್ಯಾಯಾಲಯವು ದಿನಾಂಕ: **04.06.2018**ರಂದು ಈ ವಿಚಾರಣಾ ಪ್ರಕ್ರಿಯೆಗೆ ತಡೆಯಾಜ್ಞೆಯನ್ನು ನೀಡಿರುತ್ತದೆ. ಸದರಿ ತಡೆಯಾಜ್ಞೆಯನ್ನು ತೆರವುಗೊಳಿಸಲು ದಿ: 16.08.2018ರಂದು ಮಾನ್ಯ ನ್ಯಾಯಾಲಯಕ್ಕೆ ಅರ್ಜಿಯನ್ನು **(Interlocutory Application)** ಸಲ್ಲಿಸಲಾಗಿತ್ತು. ಈ ಪ್ರಕರಣವು ದಿ: **17.03.2020**ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ವಿಚಾರಣೆಗೆ ಬಂದು ಮುಂದಿನ ವಿಚಾರಣೆಗಾಗಿ ಮುಂದೂಡಲ್ಪಟ್ಟಿರುತ್ತದೆ. |
| (ಇ) | ನೇಮಕಾತಿಯಲ್ಲಿ ಅಕ್ರಮವೆಸಗಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು; | ಅನ್ವಯಿಸುವುದಿಲ್ಲ |
| (ಈ) | ಅಕ್ರಮವೆಸಗಿದ್ದರೆ ನೇಮಕಾತಿ ಆದೇಶ ರದ್ದು ಮಾಡಿ ಹೊಸದಾಗಿ ನೇಮಕಾತಿ ಮಾಡಿಕೊಳ್ಳುವ ಬಗ್ಗೆ ಸರ್ಕಾರ ಚಿಂತಿಸಿದೆಯೇ? | ಅನ್ವಯಿಸುವುದಿಲ್ಲ |

ಸಂಖ್ಯೆ: ಕೃಇ 30 ಕೃವಿಬೆ 2020

(ಬಿ.ಸಿ. ಪಾಟೀಲ್)
ಕೃಷಿ ಸಚಿವರು